# ಸರಕಾರ ಮತ್ತು ಶೈಕ್ಷಣಿಕ ಯೋಜನೆಗಳ ಮಾರ್ಗದಲ್ಲಿನ ದೋಷಗಳು: 
## ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ (DPEP) ಮತ್ತು ಸರ್ವ ಶಿಕ್ಷಣ ಅಭಿಯಾನದಿಂದ (SSA) ಕಲಿತ ಪಾಠಗಳು

ರಶ್ಮಿ ಶರ್ಮಾ



ಭಾರತದ ಆರಂಭಿಕ ಶಿಕ್ಷಣಕ್ಕೆ ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ (DPEP) ಮತ್ತು ಅದರ ನಂತರದ ಸರ್ವ ಶಿಕ್ಷಣ ಅಭಿಯಾನಗಳು (SSA) ಅತ್ಯಂತ ಪ್ರಮುಖವಾದ ಯೋಜನೆಗಳಾಗಿವೆ. DPEP ಯೋಜನೆಯು ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸುವ ಗುರಿಯನ್ನು ಹೊಂದಿದ್ದರೆ, SSAಯು ಆರಂಭಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸುವ ಗುರಿಯನ್ನು ಹೊಂದಿದೆ. ಇವೆರಡೂ ಯೋಜನೆಗಳು ಶಿಕ್ಷಣದಲ್ಲಿನ ಲಿಂಗ ತಾರತಮ್ಯ ಮತ್ತು ಸಾಮಾಜಿಕ ಅಸಮಾನತೆಗಳನ್ನು ಕಡಿಮೆ ಮಾಡಿ ಮಕ್ಕಳ ಕಲಿಕಾ ಮಟ್ಟಗಳನ್ನು ಸುಧಾರಿಸುವ ಆಶಯವನ್ನು ಹೊಂದಿವೆ. ಈ ಯೋಜನೆಗಳು ಮುಂದುವರಿಯ ತೊಡಗಿದಂತೆ, ಅವು ನೀತಿಗಳನ್ನು ಅನುಷ್ಠಾನಕ್ಕೆ ತರುವ ನಿಟ್ಟಿನಲ್ಲಿ ಮಾತ್ರವಲ್ಲದೆ ಅದನ್ನು ಸೃಜಿಸುವ ಮತ್ತು ಸಾಂಸ್ಥಿಕ ಸಂರಚನೆಯನ್ನು ಬದಲಾಯಿಸುವ ನಿಟ್ಟಿನಲ್ಲಿಯೂ ಬಹಳ ಮುಖ್ಯವಾದ ಪಾತ್ರವನ್ನು ವಹಿಸಿದವು. DPEP ಮತ್ತು SSA ಈ ಎರಡರ ಮೂಲಕವೂ ಹೊಸ ಶಾಲೆಗಳು ಮತ್ತು ಪೂರಕ ಸಂಸ್ಥೆಗಳನ್ನು ಸ್ಥಾಪಿಸಲಾಯಿತು, ಶಿಕ್ಷಕರನ್ನು ಕುರಿತ ಹೊಸ ನೀತಿಗಳು ರೂಪುಗೊಂಡವು, ಪಠ್ಯಪುಸ್ತಕಗಳು, ಬೋಧನಾ ವಿಧಾನಗಳು, ವಿದ್ಯಾರ್ಥಿಗಳ ಮೌಲ್ಯಮಾಪನದಂತಹ ಬೋಧನೆಗೆ ಸಂಬಂಧಿಸಿದ ಅಭ್ಯಾಸಗಳನ್ನೂ ಅವು ಪ್ರಭಾವಿಸಿದವು.

ಓರ್ವ ಭಾರತೀಯ ಆಡಳಿತ ಸೇವೆಯ ಅಧಿಕಾರಿಯಾಗಿ (IAS) DPEP ಮತ್ತು ಪೂರ್ವಶಿಕ್ಷಣ ಅಭಿಯಾನಗಳಲ್ಲಿ ನಾನು ಸಂತಸದಿಂದಲೇ ತೊಡಗಿಕೊಂಡೆ, ಏಕೆಂದರೆ ನನಗೆ ಆರಂಭಿಕ (ಪ್ರಾಥಮಿಕ) ಶಿಕ್ಷಣದಲ್ಲಿ ತೀವ್ರ ಆಸಕ್ತಿ ಇತ್ತು. ಅಚ್ಚರಿಯ ಸಂಗತಿಯೆಂದರೆ ಈ ಎರಡು ಯೋಜನೆಗಳಲ್ಲಿ ಕೆಲಸ ಮಾಡಿದ ಅನುಭವವು ನನ್ನ ಆದ್ಯ ಕ್ಷೇತ್ರವಾದ ಸರಕಾರಿ ಕ್ಷೇತ್ರದ ಕೆಲಸಗಳಲ್ಲಿನ ಆಸಕ್ತಿಗೆ ಮರುಹುಟ್ಟು ನೀಡಿತು. ಪಠ್ಯಪುಸ್ತಕ ರಚನೆ, ಶಿಕ್ಷಕ ತರಬೇತಿ, ವಿದ್ಯಾರ್ಥಿಗಳ ಮೌಲ್ಯಮಾಪನದಂತಹ ಬೋಧನೆಗೆ ಸಂಬಂಧಪಟ್ಟ ವಿಷಯಗಳ ಮೇಲೆ ನಾನು ಸರಕಾರದ ಒಳಗಿನ ಮತ್ತು ಹೊರಗಿನ ವ್ಯಾಪ್ತಿಯ ಸಹೋದ್ಯೋಗಿಗಳೊಂದಿಗೆ ಕೂಡಿ ಕೆಲಸ ಮಾಡುವಾಗ ಅನೇಕ ಬೋಧನೇತರ ಘಟನೆಗಳು ನಡೆದವು, ಅವು ಕಲಿಸುವ ಮತ್ತು ಕಲಿಯುವ ಪ್ರಕ್ರಿಯೆಗಳನ್ನು ಕುರಿತ ಕಾಳಜಿಗಳನ್ನು ಕತ್ತಲಲ್ಲಿರಿಸಿ ನಮ್ಮ ಪ್ರಯತ್ನಗಳನ್ನು ಅನಿರೀಕ್ಷಿತ ದಿಕ್ಕುಗಳತ್ತ ಎಳೆದುಕೊಂಡು ಹೋದವು. ಆ ಹೊತ್ತಿನಲ್ಲಿ ನನಗೆ ಒಂದು ವಿಷಯ ಸ್ಪಷ್ಟವಾಯಿತು, ಏನೆಂದರೆ, ಆರಂಭಿಕ ಶಿಕ್ಷಣದ ಗುಣಮಟ್ಟವು ಪಠ್ಯಕ್ರಮ, ಪಠ್ಯಪುಸ್ತಕಗಳು ಮತ್ತು ಶಿಕ್ಷಕ ತರಬೇತಿಯ ಗುಣಮಟ್ಟವನ್ನು ಅವಲಂಬಿಸಿದಂತೆ, ಸರಕಾರ ಹೇಗೆ ಕೆಲಸ ಮಾಡುತ್ತದೆ ಎನ್ನುವುದನ್ನೂ ಸಹಾ ಅವಲಂಬಿಸಿದೆ, ಜೊತೆಗೆ ಶಿಕ್ಷಣ ವ್ಯವಸ್ಥೆಯಲ್ಲಿ ಸುಧಾರಣೆ ತರಬೇಕಾದರೆ ಸರಕಾರೀ ಆಡಳಿತದಲ್ಲಿ ಸುಧಾರಣೆಯಾಗುವುದು ಅತ್ಯಗತ್ಯ.

DPEPಯು 1994ರಲ್ಲಿ, ಅಂದರೆ 1991ರ ಆರ್ಥಿಕ ಸುಧಾರಣೆಗಳ ನಂತರ ಆರಂಭಗೊಂಡಿತು. ವಿದೇಶೀ ವಿನಿಮಯಕ್ಕೆ ಸಂಬಂಧಿಸಿದ ಒಂದು ಬಿಕ್ಕಟ್ಟಿನ ಹಿನ್ನೆಲೆಯಲ್ಲಿ ಈ ಆರ್ಥಿಕ ಸುಧಾರಣೆಗಳನ್ನು ತರಲಾಯಿತು, ಸರಕಾರವು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯಿಂದ (IMF)[1] ಒಂದು ತುರ್ತು ಸಾಲವನ್ನು ಪಡೆದುಕೊಂಡ ಪರಿಣಾಮವಾಗಿ ಉಂಟಾದ ಬಿಕ್ಕಟ್ಟು ಅದು. IMFನಿಂದ ಸಾಲ ಪಡೆದುಕೊಳ್ಳುವುದಕ್ಕೆ ನಮ್ಮ ಅರ್ಥವ್ಯವಸ್ಥೆಯನ್ನು ಮುಕ್ತಗೊಳಿಸುವುದು ಅವಶ್ಯವಿತ್ತು, ಅಂದರೆ ಉದ್ಯಮಗಳಿಗೆ ನೀಡುವ ಪರವಾನಗಿ ಮತ್ತು ಮೀಸಲಾತಿಯನ್ನು ನಿಲ್ಲಿಸುವುದು, ಹಾಗೂ ಸುಂಕದ ಮೇಲಿನ ಮಿತಿಗಳನ್ನು ಕಡಿಮೆ ಮಾಡುವುದು ಅವಶ್ಯವಿತ್ತು. ಆದರೆ ಸರಕಾರದ ಖರ್ಚುವೆಚ್ಚಗಳೂ ನಿಯಂತ್ರಿತಗೊಳ್ಳಬೇಕಿದ್ದು, ಇದರ ಪರಿಣಾಮವಾಗಿ ಆರಂಭಿಕ ಶಿಕ್ಷಣವನ್ನೂ ಒಳಗೊಂಡ ಸಾಮಾಜಿಕ ಕ್ಷೇತ್ರದ ಮೇಲೆ ಆರ್ಥಿಕ ಒತ್ತಡ ಬಿತ್ತು. ಈ ರೀತಿಯ ಹಣಕಾಸಿನ ನಿರ್ಬಂಧಗಳು ಮತ್ತು ಕಡಿತಗಳು ಸಮಾಜದ ಅತೀ ಬಡವರ ಮೇಲಿನ ಹೊಡೆತವಾಗಿದೆ, ಅದರಲ್ಲೂ ಶಿಕ್ಷಣಕ್ಕೆ ಸಂಬಂಧಿಸಿದಂತೆ ಆರಂಭಿಕ ಶಿಕ್ಷಣದ ಸಾರ್ವತ್ರೀಕರಣವನ್ನು ಅದು ನಿಲ್ಲಿಸುತ್ತದೆ ಎಂಬ ಅಳುಕನ್ನು ನೀತಿಯನ್ನು ರೂಪಿಸಿದವರು ವ್ಯಕ್ತಪಡಿಸಿದ್ದರು. ಶಿಕ್ಷಣದ ಸಾರ್ವತ್ರೀಕರಣವು ಭಾರತೀಯ ಸಂವಿಧಾನದ ನಿರ್ದೇಶಕ ತತ್ತ್ವಗಳಲ್ಲಿ ಒಂದು ಕಡ್ಡಾಯವಾಗಿ ಪಾಲಿಸಲೇಬೇಕಾದ ತತ್ತ್ವವಾಗಿದೆ. ಇದಲ್ಲದೇ ಈ ಸಮಯದಲ್ಲಿ ಭಾರತವು ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ಅನೇಕ ಅಂತರರಾಷ್ಟ್ರೀಯ ಒಪ್ಪಂದಗಳಿಗೆ ಸಹಿ ಹಾಕಿತ್ತು. ಹೀಗಾಗಿ ಸರಕಾರವು ಪ್ರಾಥಮಿಕ ಶಿಕ್ಷಣಕ್ಕಾಗಿ ಐರೋಪ್ಯ ಒಕ್ಕೂಟ, ವಿಶ್ವ ಬ್ಯಾಂಕ್ ಮುಂತಾದ ಹೊರಗಿನ ಹಣಕಾಸು ಸಂಸ್ಥೆಗಳಿಂದ ಆರ್ಥಿಕ ಸಹಾಯವನ್ನು ಪಡೆಯಲು ನಿರ್ಧರಿಸಿತು. ಅದರ ಫಲವಾಗಿ ಹಿಂದುಳಿದ ಜಿಲ್ಲೆಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸುವ ಕೆಲಸಕ್ಕೆ ಬಾಹ್ಯ ನೆರವನ್ನು ಹೊಂದಿದ ಯೋಜನೆಯೊಂದು ರೂಪುಗೊಂಡಿತು, ಅದುವೇ DPEP.

DPEP ಯು ಆ ಸಮಯದಲ್ಲಿದ್ದ ಅನೇಕ ಸರಕಾರೀ ಯೋಜನೆಗಳಿಂದ ಹಲವು ಬಗೆಯಲ್ಲಿ ಭಿನ್ನವಾಗಿತ್ತು. ಮೊದಲಿಗೆ ಅದು ಇಲಾಖಾ ವ್ಯವಸ್ಥೆಗಿಂತಲೂ ಹೆಚ್ಚಾಗಿ, ಒಂದು ಯೋಜನಾ ವ್ಯವಸ್ಥೆಯ ಸ್ವರೂಪದಲ್ಲಿ ಅನುಷ್ಠಾನಗೊಂಡಿತ್ತು. ಜಿಲ್ಲೆ ಮತ್ತು ರಾಜ್ಯ ಮಟ್ಟದಲ್ಲಿ ಯೋಜನೆಯನ್ನು ನಿರ್ವಹಿಸಲು ನಿರ್ಮಿಸಿದ DPEP ಕಛೇರಿಗಳು ಸರಕಾರಿ ಇಲಾಖೆಗಳ ಕಛೇರಿಗಳಿಂದ ಪ್ರತ್ಯೇಕವಾಗಿ ಅಸ್ತಿತ್ವಕ್ಕೆ ಬಂದವು. ಈ ನಿರ್ಧಾರಕ್ಕೆ ಎರಡು ಕಾರಣಗಳಿದ್ದವು. ಮೊದಲನೆಯದಾಗಿ, DPEPಯು ಅನೇಕ ಬಾಹ್ಯ ಏಜೆನ್ಸಿಗಳಿಂದ ಹಣಕಾಸಿನ ನೆರವನ್ನು ಪಡೆದಿದ್ದರಿಂದ ಆ ಹಣಕಾಸು ಸಂಸ್ಥೆಗಳು ಯೋಜನೆಯ ಖರ್ಚುವೆಚ್ಚಗಳನ್ನು ಹೆಚ್ಚು ಸುಗಮವಾಗಿ

1 ಇಂಗ್ಲಿಷ್ ಮೂಲದ ಲೇಖನದಲ್ಲಿ IMFನ ಪೂರ್ಣರೂಪ ಭಾರತೀಯ ಹಣಕಾಸು ಸಂಸ್ಥೆ ಎಂದು ಆಗಿದೆ. ಆದರೆ ಅದು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಎಂದಾಗಬೇಕಿತ್ತು. International Monetary Fund: IMF. [ಅನುವಾದಕಿ]

ನೋಡಿಕೊಳ್ಳಲು ಮತ್ತು ಮೇಲುಸ್ತುವಾರಿ ನಡೆಸಲು ಅದು ಅನುಕೂಲ ಮಾಡಿಕೊಟ್ಟಿತು. ಆದರೆ ದೂರಗಾಮಿ ನೋಟದಲ್ಲಿ ಇದಕ್ಕಿಂತ ಮುಖ್ಯವಾದ ಇನ್ನೊಂದು ಕಾರಣವೆಂದರೆ, ಸಾಮಾನ್ಯವಾಗಿ ಅಸ್ತಿತ್ವದಲ್ಲಿದ್ದ ಸರಕಾರಿ ಕಛೇರಿಗಳು ಮತ್ತು ಸಂಸ್ಥೆಗಳು DPEPಯ ಪರಿಕಲ್ಪನೆಯ ಅಭಿವೃದ್ಧಿಯ ಕೆಲಸಗಳನ್ನು ನಿಭಾಯಿಸಲು ಶಕ್ತವಾಗಿಲ್ಲ ಎಂಬ ನಂಬಿಕೆ. ಆಗ ಶಿಕ್ಷಣ ವ್ಯವಸ್ಥೆಯ ಆಡಳಿತ ಸಂರಚನೆಯು ವೇತನವನ್ನು ವಿತರಿಸುವುದು, ಪರೀಕ್ಷೆಗಳನ್ನು ಸಂಘಟಿಸುವುದು, ನಿರುತ್ಸಾಹಕರ ಶಾಲಾ ಪರಿವೀಕ್ಷಣೆಗಳಂತಹ ಮಾಮೂಲಿ ಚಟುವಟಿಕೆಗಳಲ್ಲಿಯೇ ವ್ಯಸ್ತವಾಗಿದೆ ಎಂಬುದಾಗಿ ಯೋಜನಾ ವಿಧಾನದ ಪ್ರತಿಪಾದಕರು ವಾದಿಸಿದರು. ಶೈಕ್ಷಣಿಕ ಸಂಸ್ಥೆಗಳಲ್ಲಿ ನೈಜ ಪರಿಣತಿ ಮತ್ತು ಹೊಸತನ್ನು ಹುಡುಕುವ ಸಂಕಲ್ಪದ ಕೊರತೆಯಿತ್ತು. ಇದಕ್ಕೆ ವ್ಯತಿರಿಕ್ತವಾಗಿ ಒಂದು ಉತ್ತಮ ಗುಣಮಟ್ಟದ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣವನ್ನು ಆಶಿಸುವುದಾದರೆ ಮಕ್ಕಳನ್ನು ಶಾಲೆಗೆ ಬರುವಂತೆ ಮಾಡಲು, ವಿಶೇಷವಾಗಿ ಹೆಣ್ಣುಮಕ್ಕಳು, ಪರಿಶಿಷ್ಟ ಜಾತಿಗಳು ಮತ್ತು ಬುಡಕಟ್ಟುಗಳ ಮಕ್ಕಳು, ಹಾಗೂ ವಿಶಿಷ್ಟಚೇತನರನ್ನು ಶಾಲೆಯತ್ತ ಆಕರ್ಷಿಸಲು ಸಾಮುದಾಯಿಕ ಚಲನಶೀಲತೆಯ ಅವಶ್ಯಕತೆ ಇರುತ್ತದೆ, ಜೊತೆಗೆ ಒಂದು ಆಸಕ್ತಿದಾಯಕ ಮತ್ತು ಆಕರ್ಷಕ ತರಗತಿಕೋಣೆಯನ್ನು ಸಜ್ಜುಗೊಳಿಸುವ ಅವಶ್ಯಕತೆಯೂ ಇರುತ್ತದೆ.

ನಾನು ಮಧ್ಯಪ್ರದೇಶದ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿಯ ರಾಜ್ಯ ಪರಿಷತ್ತಿನಲ್ಲಿ (SCERT) ನಿರ್ದೇಶಕಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ DPEPಯೊಂದಿಗೆ ಆದ ಅನುಭವವು ಇವು ಈಗ ನಮ್ಮ ಸಂಸ್ಥೆಗಳಲ್ಲಿ ಅಸ್ತಿತ್ವದಲ್ಲಿರುವ ನೈಜ ಸಮಸ್ಯೆಗಳು ಎನ್ನುವುದನ್ನು ಸ್ಪಷ್ಟಪಡಿಸಿತು. ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿಯ ರಾಜ್ಯ ಪರಿಷತ್ತಿಗೆ ಚಟುವಟಿಕೆಗಳನ್ನು ಆಧರಿಸಿದ ಕಲಿಕೆ ಮತ್ತು ಶಿಕ್ಷಕ ತರಬೇತಿಯನ್ನು ಉತ್ತೇಜಿಸುವಂತಹ ಹೊಸ ಪಠ್ಯಪುಸ್ತಕಗಳನ್ನು ರಚಿಸುವ ಜವಾಬ್ದಾರಿಯನ್ನು ಕೊಡಲಾಗಿತ್ತು. ಆದರೆ ವಾಸ್ತವ ಪರಿಸ್ಥಿತಿ ಹೇಗಿತ್ತೆಂದರೆ SCERT ಯಲ್ಲಿ ಈ ಪ್ರಕ್ರಿಯೆಗಳಿಗೆ ಮಾರ್ಗದರ್ಶನ ನೀಡಬಲ್ಲ ಪರಿಣಿತರೇ ಇರಲಿಲ್ಲ. SCERTಯು ಅದುವರೆಗೂ ಪ್ರಕಟಿಸಿದ ಪಠ್ಯಪುಸ್ತಕಗಳು ನೀರಸವಾಗಿದ್ದು, ತಾತ್ಸಾರದಿಂದ ಕೂಡಿದ್ದು, ಆಲೋಚಿಸಿ ತಯಾರಿಸಿದ ಬೋಧನಾ ತಂತ್ರಗಳನ್ನು ಆಧರಿಸಿರುತ್ತಿರಲಿಲ್ಲ, ಮತ್ತು ಭರಪೂರ ಮುದ್ರಣ ದೋಷಗಳನ್ನು ಹೊಂದಿರುತ್ತಿತ್ತು! ಉತ್ತಮ ಗುಣಮಟ್ಟದ ಚಟುವಟಿಕೆಗಳನ್ನು ಆಧರಿಸಿದ ಪಠ್ಯಪುಸ್ತಕಗಳನ್ನು ತಯಾರಿಸಲು NGOಗಳೊಂದಿಗೆ ಮತ್ತು ಸರಕಾರೇತರ ತಜ್ಞರೊಂದಿಗೆ ಗಹನವಾದ ಸಮಾಲೋಚನೆಯ ಅವಶ್ಯಕತೆ ತಲೆದೋರಿತು. SCERT ಸಿಬ್ಬಂದಿಯು ತಾವೇ ಸ್ವತಃ ಸುಧಾರಣೆಗಳ ನಾಯಕತ್ವವನ್ನು ವಹಿಸಿಕೊಳ್ಳುವ ಬದಲು ಬೋಧನೆಗೆ ಸಂಬಂಧಪಟ್ಟ ಹೊಸ ಶೈಕ್ಷಣಿಕ ಅಭ್ಯಾಸಗಳಿಗೆ ಅಡ್ಡಿಪಡಿಸದೆ, ಅದರಲ್ಲಿ ಭಾಗಿಯಾಗುವಂತೆ ಪುಸಲಾಯಿಸಬೇಕಾದ ಪರಿಸ್ಥಿತಿಯಿತ್ತು. ಸಿಬ್ಬಂದಿಯಲ್ಲಿ ಕೆಲವರು ಜೊತೆಗೂಡಿ, ಶ್ರಮವಹಿಸಿದರಾದರೂ, ಕೆಲವರು ನಿರಾಸಕ್ತಿಯಿಂದಲೇ ಪಾಲ್ಗೊಂಡರು.

ರಾಜ್ಯ ಸರ್ಕಾರವು SCERT ಯನ್ನು ಒಂದು ಅತ್ಯುತ್ತಮ ಗುಣಮಟ್ಟದ ಸಂಸ್ಥೆಯನ್ನಾಗಿ ಬೆಳೆಸಲು ಗಮನ ಕೊಡಲಿಲ್ಲ ಎನ್ನುವುದು ಈ ಅನುಭವದಿಂದ ಸ್ಪಷ್ಟವಾಗಿ ತಿಳಿದುಬಂದಿತು. SCERTಗೆ ಆಯ್ಕೆಗೊಂಡ ಅಭ್ಯರ್ಥಿಗಳು ವಾಡಿಕೆಯಂತೆ ಕಾಲೇಜು ಉಪನ್ಯಾಸಕರಾಗಿದ್ದು, ಅವರು ಅಲ್ಲಿದ್ದದ್ದು ತಮಗೆ ಶಾಲಾ ಶಿಕ್ಷಣದಲ್ಲಿ ಆಸಕ್ತಿಯಿದೆಂದಾಗಲೀ ತಮಗೆ ವಿಶೇಷ ಪರಿಣಿತಿ ಇದೆ ಎಂಬ ಕಾರಣಕ್ಕಾಗಲಿ ಅಲ್ಲ. ಅವರಿಗೆ ಭೂಪಾಲದಲ್ಲಿಯೇ ಇರಬೇಕಿತ್ತು ಮತ್ತು ತಮ್ಮ ನೇಮಕಾತಿಯ ನಿಟ್ಟಿನಲ್ಲಿ ಪ್ರಭಾವ ಮುಂತಾದುವನ್ನು ಅವರು ಜಾಣ್ಮೆಯಿಂದ ಬಳಸಲು ಇಚ್ಛಿಸಿದ್ದರು. ಅವರಲ್ಲಿ ಕೆಲವರಿಗೆ ಯಾವುದೇ ರೀತಿಯ ಕೆಲಸದಲ್ಲಿ ಆಸಕ್ತಿ ಇರಲಿಲ್ಲ, ಕೆಲವರು ಅಂದಿನಿಂದ ನಡೆದುಬಂದಂತೆ ಸ್ವಾರಸ್ಯವಿಲ್ಲದ ಪಠ್ಯಪುಸ್ತಕಗಳನ್ನು ರಚಿಸುತ್ತ, ನೀರಸ ಶಿಕ್ಷಕ ತರಬೇತಿಯ ಮಾಡ್ಯೂಲ್ಗಳನ್ನು ತಯಾರು ಮಾಡುತ್ತ ಉಳಿದರು. ನಿಜಕ್ಕೂ ಕೆಲಸ ಮಾಡುವ ಮನಸ್ಸಿದ್ದ ಕೆಲವರಿಗೆ ಅನುಭವವಿರಲಿಲ್ಲ ಮತ್ತು ಪ್ರೋತ್ಸಾಹವೂ ಸಿಗುತ್ತಿರಲಿಲ್ಲ. ಈಗ ಸರಕಾರವು ಪ್ರಾಥಮಿಕ ಶಿಕ್ಷಣದ ಗುಣಮಟ್ಟವನ್ನು ಸುಧಾರಿಸಲು ಯತ್ನಿಸಿದಾಗ ತನ್ನದೇ ಸಂಸ್ಥೆಯಿಂದ ಪ್ರಯೋಜನವಾಗಲಿಲ್ಲ. ಮಾನವ ಸಂಪನ್ಮೂಲದ ಈ ಸಮಸ್ಯೆಯು ಕೇವಲ SCERT ಸಂಸ್ಥೆಯದೊಂದೇ ಆಗಿರಲಿಲ್ಲ, ಇಡೀ ವ್ಯವಸ್ಥೆಯೇ ಹಾಗಿತ್ತು. ಆಡಳಿತ ಕಛೇರಿಗಳಲ್ಲಿ ತರಬೇತಿ ಪಡೆದ ಶೈಕ್ಷಣಿಕ ಆಡಳಿತಗಾರರ ಕೊರತೆ ಇತ್ತು, ಅಲ್ಲದೇ ಲಿಂಗ ಅಸಮಾನತೆಯನ್ನು ಹೋಗಲಾಡಿಸುವ, ಸಮುದಾಯಗಳನ್ನು ಸಂಘಟಿಸುವ, ಮತ್ತು ವಿಶೇಷ ಚೇತನರ ಶಿಕ್ಷಣವನ್ನು ಕುರಿತ ಪರಿಣತರ ಕೊರತೆಯೂ ಇತ್ತು. ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ಆಮೂಲಾಗ್ರವಾಗಿ ಭಿನ್ನವಾದ ಸಾಂಸ್ಥಿಕ ವ್ಯವಸ್ಥೆಯೊಂದರ ಬೆಂಬಲ ಅತ್ಯಗತ್ಯವಾಗಿತ್ತು.

ಇಂತಹ ಪರಿಸ್ಥಿತಿಯಲ್ಲಿ ಎರಡು ಹಾದಿಗಳು ಸಾಧ್ಯವಿದ್ದವು. ಒಂದನೆಯದಾಗಿ ಸರಕಾರವು ಈಗ ಅಸ್ತಿತ್ವದಲ್ಲಿದ್ದ ಸಂಸ್ಥೆಗಳನ್ನು ಸುಧಾರಿಸುವುದು. ಎರಡನೆಯದಾಗಿ, ಉತ್ತಮ ಪರಿಣತಿ ಮತ್ತು ಉತ್ತಮ ಕಾರ್ಯನಿರ್ವಹಣೆಯ ವಿಧಾನಗಳೊಂದಿಗಿನ ಪ್ರತ್ಯೇಕ ಯೋಜನಾ ವ್ಯವಸ್ಥೆಯೊಂದನ್ನು ರೂಪಿಸುವುದು. ಮೊದಲನೆಯ ಸಾಧ್ಯತೆಯನ್ನು ಗಂಭೀರವಾಗಿ ಪರಿಗಣಿಸಲೇ ಇಲ್ಲ. ಹೊಸ ಶಾಲೆಗಳ ನಿರ್ಮಾಣ, ಪಠ್ಯಪುಸ್ತಕಗಳ ಬದಲಾವಣೆ, ಶಿಕ್ಷಕರಿಗೆ ತರಬೇತಿ ನೀಡುವುದು ಮುಂತಾದ ಕೆಲಸಗಳು ತ್ವರೆಯಿಂದ ಶುರುವಾಗುವುದು ರಾಜಕೀಯ ಅಗತ್ಯವಾಗಿತ್ತು; ಜೊತೆಗೆ ಹಣಕಾಸಿನ ನೆರವು ನೀಡಿದ ಸಂಸ್ಥೆಗಳ ಒತ್ತಡವಿತ್ತು. ಹೀಗಾಗಿ ತ್ವರಿತ ಕಾರ್ಯಶೀಲತೆಯ ಅಗತ್ಯವಿತ್ತು. ಈಗಾಗಲೇ ಇದ್ದ ವ್ಯವಸ್ಥೆಯನ್ನು ಪರಿವರ್ತಿಸಲು ಸಮಯ ಬೇಕಿತ್ತು. ಅದು ಕಷ್ಟವೂ ಇತ್ತು: ಅಂದರೆ ಯೋಗ್ಯರನ್ನು ಸೂಕ್ತ ಜಾಗಗಳಲ್ಲಿ ಕೂರಿಸುವ ಕೆಲಸ ಸುಲಭವಿರಲಿಲ್ಲ. ಒಳ್ಳೆಯ ಸ್ಥಾನಗಳಿಗೆ ಅರ್ಹತೆಯನ್ನು ಕಡೆಗಣಿಸಿ ತಮಗೆ ಬೇಕಾದವರನ್ನು ನೇಮಿಸುವುದು ಮಾಮೂಲಾಗಿತ್ತು, ಈ ರೂಢಿಯನ್ನು ಬದಲಾಯಿಸುವುದೆಂದರೆ ಅಸ್ತಿತ್ವದಲ್ಲಿದ್ದ ಅಧಿಕಾರದ ಸಮೀಕರಣಗಳನ್ನು ಬುಡಮೇಲು ಮಾಡಿದಂತೆ. ಅದರರ್ಥ, ಆದೇಶ ಮತ್ತು ನಿಯಂತ್ರಣದ ಶೈಲಿಯ ಬದಲಿಗೆ, ಹೆಚ್ಚು ಚಿಂತನಾತ್ಮಕ ಮತ್ತು ಪ್ರಜಾತಾಂತ್ರಿಕ ರೀತಿಯ ಕಾರ್ಯನಿರ್ವಹಣೆ. ಆದರೆ ಅದು ಅಧಿಕಾರದಲ್ಲಿದ್ದವರಿಗೆ ನುಂಗಲಾರದ ತುತ್ತಾಗುತ್ತಿತ್ತು. ಈ ಎಲ್ಲಾ ತೊಡಕುಗಳನ್ನು ಅರಿತು DPEP ಯೋಜನೆಯನ್ನು ಒಂದು ಯೋಜನಾ ವ್ಯವಸ್ಥೆಯ ರೂಪದಲ್ಲಿ ಅನುಷ್ಠಾನಕ್ಕೆ ತರಲಾಯಿತು.

ಈ ಯೋಜನಾ ಮಾರ್ಗವು ಒಂದು ಮಟ್ಟದವರೆಗೆ ಕೆಲಸ ಮಾಡಿತು. ಹೊಸ ಶಾಲೆಗಳ ನಿರ್ಮಾಣವಾಯಿತು, ಪಠ್ಯಪುಸ್ತಕಗಳು ವಿಸ್ತೃತವಾಗಿ ಸುಧಾರಿಸಲ್ಪಟ್ಟವು, ಶಿಕ್ಷಕ ತರಬೇತಿಯನ್ನು ದೊಡ್ಡ ಪ್ರಮಾಣದಲ್ಲಿ ಕೈಗೊಳ್ಳಲಾಯಿತು, ಸಮುದಾಯಗಳನ್ನು ಸಂಘಟಿಸಲಾಯಿತು, ಮಕ್ಕಳನ್ನು ಶಾಲೆಗೆ ಸೇರಿಸಲು ವಿವಿಧ ಬಗೆಯ ತಂತ್ರಗಳನ್ನು ಬಳಸಲಾಯಿತು. ಹೀಗೆ ಅನೇಕ ಚಟುವಟಿಕೆಗಳು ಕಾರ್ಯಾರಂಭಗೊಂಡವು.

ಇದು ಹೀಗಾಗಲು ಏನು ಕಾರಣ? ಈ ಹೊಸ ಯೋಜನಾ ವ್ಯವಸ್ಥೆಯು ಹಳೆಯ ಸರಕಾರಿ ವ್ಯವಸ್ಥೆಗಳಿಗಿಂತ ಉತ್ತಮವಾಗಿ ನಿಭಾಯಿಸಿದ್ದು ಹೇಗೆ? DPEPP ಸಿಬ್ಬಂದಿಯು ಸರಕಾರಿ ಕಛೇರಿಗಳಲ್ಲಿ ಮತ್ತು ಸಂಸ್ಥೆಗಳಲ್ಲಿ ಇದ್ದಂತೆ ಬಡ್ತಿ ಪಡೆದು ಹುದ್ದೆಯನ್ನಲಂಕರಿಸಿದ್ದ ಹಾಗೂ ಹೊಸ ಜವಾಬ್ದಾರಿಗಳಿಗಾಗಿ ಮರು-ತರಬೇತಿಯನ್ನು ಪಡೆಯದ ಶಿಕ್ಷಕರನ್ನು ಒಳಗೊಂಡಿರಲಿಲ್ಲ, ಬದಲಿಗೆ ಲಿಂಗ ಅಸಮಾನತೆ, ಅವಕಾಶ ವಂಚಿತ ಸಮುದಾಯಗಳ ಮಕ್ಕಳು, ವಿಶಿಷ್ಟ-ಚೇತನರು, ಸಮುದಾಯ ಸಂಘಟನೆ ಮುಂತಾದವುಗಳಲ್ಲಿ ಪರಿಣತರಾದ ತಜ್ಞರನ್ನು ಒಳಗೊಂಡಿತ್ತು. DPEPಯಲ್ಲಿ ಮಾಮೂಲಿ ವ್ಯವಸ್ಥೆಯಲ್ಲಿದ್ದಂತೆ ಯಾರದ್ದೋ ಪ್ರಭಾವ ಬಳಸಿ ವರ್ಗಾವಣೆ ಮತ್ತು ಹುದ್ದೆಗಳ ನೇಮಕಾತಿ ಮಾಡುವ ರೂಢಿಗಳಿಗೆ ಬದಲಾಗಿ ಇದ್ದದ್ದರಲ್ಲಿ ಉತ್ತಮ ಅರ್ಹತೆಯುಳ್ಳ ತಜ್ಞರನ್ನೇ ನೇಮಿಸಿಕೊಳ್ಳಲಾಯಿತು. DPEPಯಲ್ಲಿ ಮಾನವ ಸಂಪನ್ಮೂಲದ ನಿರ್ವಹಣೆಯಲ್ಲಿ ಶಿಫಾರಸ್ಸು ಮತ್ತು ಪ್ರಭಾವಗಳನ್ನು ಬಳಸಿ ನೇಮಕಾತಿಯನ್ನು ನಿರ್ವಹಿಸುವ ಬದಲು ಅರ್ಹತೆ ಮತ್ತು ಪರಿಣತಿಯನ್ನು ಪರಿಗಣಿಸಲಾಯಿತು. ಇದಕ್ಕೆ ಮುಂದೆ NGOಗಳು ಮತ್ತು ಸಂಪನ್ಮೂಲ ವ್ಯಕ್ತಿಗಳೊಂದಿಗಿನ ನಿರಂತರ ತೊಡಗಿಸಿಕೊಳ್ಳುವಿಕೆಯ ಮೂಲಕ ಇನ್ನಷ್ಟು ಬೆಂಬಲ ಸಿಕ್ಕಿತು, ಸರಕಾರೇತರ ಕ್ಷೇತ್ರಗಳಿಂದಲೂ ತಜ್ಞರನ್ನು ಸೇರಿಸಿಕೊಳ್ಳಲಾಯಿತು.

ಅತ್ತ DPEP ಹೊಸ ಕಾರ್ಯವಿಧಾನಗಳನ್ನು ಅಳವಡಿಸಿಕೊಂಡು ಕೆಲಸ ಮಾಡುತ್ತಿದ್ದರೆ ಇತ್ತ ಎಂದಿನ ಸರಕಾರಿ ಇಲಾಖೆಗಳ ವ್ಯವಸ್ಥೆಯಲ್ಲಿ ಆ ರೀತಿಯ ಬದಲಾವಣೆಗಳಿಗೆ ಯಾವ ಪ್ರಯತ್ನಗಳನ್ನೂ ಕೈಗೊಳ್ಳಲಿಲ್ಲ. ವಾಸ್ತವದಲ್ಲಿ ಇಲಾಖಾ ಸಂರಚನೆಯು ಮತ್ತಷ್ಟು ದುರ್ಬಲವಾಯಿತು, ವೇತನಗಳನ್ನು ವಿತರಿಸುವ ಮತ್ತು ಪರೀಕ್ಷೆಗಳನ್ನು ನಡೆಸುವ ಮಾಮೂಲಿ ಕೆಲಸಗಳಲ್ಲಿ ತೊಡಗಿಕೊಂಡಿತು. ಮಾಮೂಲಿ ಇಲಾಖಾ ಕಛೇರಿಗಳಲ್ಲಿ ಇದ್ದ ಜನರು ಹೊಸ ಪರಿಕಲ್ಪನೆಗಳಿಗೆ ತರಬೇತಿ ಪಡೆದಿರಲಿಲ್ಲ ಮತ್ತು ಅನುಭವವನ್ನೂ ಹೊಂದಿರಲಿಲ್ಲ. ಹೀಗಾಗಿ ತಮ್ಮನ್ನು ಹೊಸ ಯೋಜನೆಗಳಿಂದ ಹೊರಗಿಡಲಾಗುತ್ತಿದೆ ಎಂದು ಅವರಿಗೆ ಅನಿಸತೊಡಗಿತ್ತು, ಅವರನ್ನು ಹೊರಗಿಟ್ಟದ್ದೂ ಹೌದು. ಈ ರೀತಿಯ ಹೊರಗಿಡುವಿಕೆಯು ಕೆಳ ಹಂತದಿಂದ ರಾಷ್ಟ್ರೀಯ ಮಟ್ಟದವರೆಗೆ ಎದ್ದು ಕಾಣುತ್ತಿತ್ತು. ಅವರಲ್ಲನೇಕರು DPEPಯ ಉಪಕ್ರಮಗಳನ್ನು ಟೀಕಿಸತೊಡಗಿದರು. ಅಲ್ಲದೆ ಯೋಜನೆಯ ಕಾರ್ಯಕ್ಕೆ ತೊಡಕುಗಳನ್ನೂ ಸೃಷ್ಟಿಸತೊಡಗಿದರು. ಎಲ್ಲಕ್ಕಿಂತ ಮುಖ್ಯವಾಗಿ ಅಸ್ತಿತ್ವದಲ್ಲಿದ್ದ ವ್ಯವಸ್ಥೆಯಲ್ಲಿ ದೀರ್ಘಕಾಲೀನ ಪರಿವರ್ತನೆಗಳನ್ನು ತರುವ ಅವಕಾಶವನ್ನು ಕಳೆದುಕೊಳ್ಳಲಾಯಿತು. ಒಂದು ವೇಳೆ ಯೋಜನೆಯ ವ್ಯವಸ್ಥೆಯಲ್ಲಿ ನೇಮಿಸಿಕೊಂಡ ತಜ್ಞರನ್ನು ಸರಕಾರಿ ಇಲಾಖೆಗಳ ಆಡಳಿತ ವ್ಯವಸ್ಥೆಯ ಭಾಗವನ್ನಾಗಿ ಮಾಡಿದ್ದರೆ, ಅಲ್ಲಿ ಅರ್ಹತೆಯನ್ನು ಆಧರಿಸಿ ವರ್ಗಾವಣೆ ಮತ್ತು ಹುದ್ದೆಗಳ ನೇಮಕಾತಿಯನ್ನು ಕಡ್ಡಾಯಗೊಳಿಸಿದ್ದರೆ, ಇಡೀ ಇಲಾಖಾ ವ್ಯವಸ್ಥೆಯನ್ನು ಹೊಸ ರೀತಿಯಲ್ಲಿ ಮರು-ತರಬೇತಿ ನೀಡಿದ್ದರೆ ಏನಾಗುತ್ತಿತ್ತು ಎನ್ನುವುದು ಒಂದು ಊಹಾತ್ಮಕ ಪ್ರಶ್ನೆಯಾಗಿ ಉಳಿಯುತ್ತದೆ.

2000ದ ಇಸವಿಯಲ್ಲಿ DPEPಯ ಜಾಗದಲ್ಲಿ ಸರ್ವ ಶಿಕ್ಷಣ ಅಭಿಯಾನವನ್ನು (SSA) ತಂದಾಗ ಕೆಲವು ಮುಖ್ಯವಾದ ಪಲ್ಲಟಗಳಾದವು. ಮೊದಲನೆಯದಾಗಿ SSA, 2000ದ ಇಸವಿಯಲ್ಲಿ ಜಾರಿಗೊಳ್ಳುತ್ತಿದ್ದಂತೆಯೇ, ಭಾರತದ ಆರ್ಥಿಕ ಪರಿಸ್ಥಿತಿಯು ತ್ವರಿತ ಗತಿಯಿಂದ ಸುಧಾರಿಸಲು ಪ್ರಾರಂಭವಾಯಿತು. ಸರಕಾರದ ಆದಾಯಗಳು ಗಣನೀಯವಾಗಿ ಹೆಚ್ಚಾಗತೊಡಗಿದವು. ಅಂದರೆ ಸರಕಾರವು ಸಾಮಾಜಿಕ ಕ್ಷೇತ್ರದಲ್ಲಿ ಹೆಚ್ಚಿನ ಹಣವನ್ನು ತೊಡಗಿಸಬಹುದಿತ್ತು. ಪರಿಣಾಮವಾಗಿ SSAಗೆ ಬಾಹ್ಯ ಮೂಲಗಳಿಂದ ಹಣಕಾಸು ದೊರೆಯುತ್ತಿರಲಿಲ್ಲ. ಅದಕ್ಕೆ ಕೇಂದ್ರ ಸರಕಾರವೇ ಧನಸಹಾಯ ನೀಡಿತು ಮತ್ತು ರಾಜ್ಯ ಸರಕಾರಗಳು ಸಣ್ಣ ಮೊತ್ತದ ಸಹಾಯ ಮಾಡಿದವು. ವರ್ಷಗಳು ಕಳೆದಂತೆ SSAಗೆ ಮತ್ತು ಅದರ ಮೂಲಕ ಆರಂಭಿಕ ಶಿಕ್ಷಣಕ್ಕೆ ಕೂಡಾ ಗಣನೀಯ ಪ್ರಮಾಣದಲ್ಲಿ ಧನಸಹಾಯವು ಹೆಚ್ಚತೊಡಗಿತು. ಇಂದು ಹಲವು ಶಾಲೆಗಳು ಎದ್ದಿವೆ, ಶಾಲೆಗಳ ಮೂಲಸೌಕರ್ಯವೂ ವಿಸ್ತೃತ ರೂಪದಲ್ಲಿ ಸುಧಾರಿಸಿದೆ, ಆರಂಭಿಕ ಶಿಕ್ಷಣಕ್ಕೆ ಮಕ್ಕಳ ದಾಖಲಾತಿಯೂ ಸರ್ವವ್ಯಾಪಿಯಾಗಿ ವೃದ್ಧಿಸಿದೆ. ಇಷ್ಟಾದರೂ ಮಕ್ಕಳ ಕಲಿಕಾ ಮಟ್ಟವು ಅತ್ಯಂತ ಕಳಪೆಯಾಗಿದೆಯಲ್ಲದೆ, ಹಣವುಳ್ಳವರ ಮಕ್ಕಳು ಖಾಸಗಿ ಶಾಲೆಗಳಿಗೆ ವಲಸೆ ಹೋಗುವುದು ನಿರಂತರವಾಗಿ ನಡೆಯುತ್ತಿದೆ. ಬೃಹತ್ ಪ್ರಮಾಣದ ಹೂಡಿಕೆಯುಳ್ಳ ಉತ್ತಮವಾಗಿ ಕಾರ್ಯ ನಿರ್ವಹಿಸುವ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯು ಇನ್ನೂ ಕೈಗೆಟುಕುತ್ತಿಲ್ಲ. ಸರಕಾರದ ಕಾರ್ಯವೈಖರಿಯಲ್ಲಿನ ದೋಷಗಳಿಗೆ ಪರ್ಯಾಯವಾಗಿ DPEPಯು ಅಲ್ಪಕಾಲೀನ ಪರಿಹಾರಗಳನ್ನು ಕೈಗೊಂಡು, ದೀರ್ಘಕಾಲೀನ ತೊಡಕುಗಳನ್ನು ನಿವಾರಿಸಲು ಸೋತಿದ್ದು ಇದಕ್ಕೆ ಕಾರಣವಾಗಿದೆ. DPEPಯು ಸಾಂಸ್ಥಿಕ ದೌರ್ಬಲ್ಯಗಳ ವಿರುದ್ಧ ಯತ್ನಿಸಿದ ರಕ್ಷಣಾತಂತ್ರಗಳನ್ನು ಸರ್ವಶಿಕ್ಷಣ ಅಭಿಯಾನದಲ್ಲಿ ಕಳಚಿ ಬಿಡಲಾಯಿತು.

ಒಂದು ರಾಷ್ಟ್ರೀಯ ಯೋಜನೆಯಾದ SSA ಯೋಜನಾ ಸಂರಚನೆಯನ್ನು ಕೈಬಿಡಬಹುದಿತ್ತು. ಈ ಯೋಜನೆಯ ಪ್ರತಿಪಾದಕರು DPEP ಯೋಜನೆಯ ಸಂರಚನೆಯನ್ನು ಟೀಕಿಸಿದ್ದರೂ ಆ ಸಂರಚನೆಯನ್ನೇ SSA ಯಲ್ಲಿಯೂ ಉಳಿಸಿಕೊಳ್ಳಲಾಯಿತು. ಏಕೆಂದರೆ DPEP ಯೋಜನಾ ಸಂರಚನೆಯ ಒಳಿತು-ಕೆಡಕುಗಳನ್ನು ಮತ್ತು ಇತರ ಸಾಧ್ಯತೆಗಳನ್ನು ಆಳವಾಗಿ ಚರ್ಚಿಸಲೇ ಇಲ್ಲ. ವಾಸ್ತವವಾಗಿ, DPEPಯಿಂದ ಕಲಿತ ಸಕಾರಾತ್ಮಕ ಮತ್ತು ನಕಾರಾತ್ಮಕ ಪಾಠಗಳತ್ತ ಅರೆಬರೆ ಗಮನವನ್ನು ನೀಡಲಾಯಿತು. ಇದು ಯಾಕಾಯಿತೆಂದರೆ, ಸರಕಾರಿ ಆಡಳಿತ ವ್ಯವಸ್ಥೆಯಲ್ಲಿ ನೀತಿಗಳು ಮತ್ತು ಯೋಜನೆಗಳು ಅತ್ಯಂತ ವ್ಯಕ್ತಿಗತ ನೆಲೆಯಲ್ಲಿ ರೂಪಿಸಲ್ಪಡುತ್ತವೆ. ಹಿಂದಿನ ಅನುಭವಗಳ ವಿಶ್ಲೇಷಣೆಯ ವ್ಯಾಪ್ತಿ ಮತ್ತು ಗಹನತೆ ಹಾಗೂ ಕಲಿತ ಪಾಠಗಳ ಸಂದರ್ಭಗಳಲ್ಲಿ ಏಕರೂಪತೆ ಇಲ್ಲ. SSAಯನ್ನು ರೂಪಿಸಿದಾಗ DPEP ಯೋಜನೆಯ ಕ್ಷಮತೆ ಮತ್ತು ದೌರ್ಬಲ್ಯಗಳ ಬಗೆಗೆ ಚರ್ಚೆ ನಡೆದದ್ದು ಅತೀ ಕಡಿಮೆ ಎನ್ನಬಹುದು. ಕೊನೆಯಲ್ಲಿ ಅದು ಸಲೀಸಾಗಿ, SSAಯ ಸ್ವಂತ ಸ್ವರೂಪವೆನಿಸಿತು. SSAಯು DPEPಯ ಜಿಲ್ಲೆಗಳನ್ನು ದಾಟಿ ಮುನ್ನಡೆಯಿತು, ಹೊಸ ಜಿಲ್ಲೆಗಳಲ್ಲಿ ಅದೇ ಹಳೆಯ ಸಂರಚನೆಯನ್ನೇ ರೂಪಿಸಲಾಯಿತು. ಜೊತೆಗೆ ದೀರ್ಘಕಾಲೀನ ಸಾಂಸ್ಥಿಕ ಸಮಸ್ಯೆಗಳನ್ನು ಬಗೆಹರಿಸುವ ಯತ್ನಗಳು ನಡೆಯಲಿಲ್ಲ.

ಅದೇ ಕಾಲಕ್ಕೆ DPEPಯ ಅನುಷ್ಠಾನವನ್ನು ಪರಿಣಾಮಕಾರಿ ಯಾಗಿಸಿದ ಅನೇಕ ಸಕಾರಾತ್ಮಕ ರೂಢಿಗಳನ್ನು ಸರ್ವಶಿಕ್ಷಣ ಅಭಿಯಾನದಲ್ಲಿ ಕೈಬಿಡಲಾಯಿತು. SSAಗೆ ಹಣ ಸಹಾಯವು ಬಾಹ್ಯ ಮೂಲದ್ದಾಗಿರದೆ, ದೇಶೀಯ ಮೂಲದ್ದಾಗಿದ್ದರಿಂದ ಮಾನವ ಸಂಪನ್ಮೂಲದ ಆಯ್ಕೆ ಮತ್ತು ಭರ್ತಿಯ ಪ್ರಕ್ರಿಯೆಗಳು

ಸರಕಾರಿ ವ್ಯವಸ್ಥೆಯಲ್ಲಿದ್ದ ರೂಢಿಗಳನ್ನೇ ಹೋಲುತ್ತಿತ್ತು. ಇದರ ಪರಿಣಾಮದಿಂದಾಗಿ, ಕಾಲಕ್ರಮೇಣ DPEPಯ ಲಕ್ಷಣಗಳಾದ ಅರ್ಹತೆಯನ್ನಾಧರಿಸಿದ ನೇಮಕಾತಿ ಮತ್ತು ಆಯ್ಕೆ ಪ್ರಕ್ರಿಯೆಗಳ ಜಾಗದಲ್ಲಿ ಪ್ರಭಾವಗಳು ಮತ್ತು ಶಿಫಾರಸ್ಸುಗಳು ಕಂಡುಬಂದವು. ಅದರ ಜೊತೆಗೆ DPEPಗೆ ಹೋಲಿಸಿದರೆ SSAಯ ಅಧಿಕಾರಿಗಳು ವ್ಯವಸ್ಥೆಯ ಹೊರಗಿನ ತಜ್ಞರನ್ನು ತೊಡಗಿಸಿದ್ದು ಅತ್ಯಂತ ಕಡಿಮೆ. ಅದರೊಂದಿಗೆ ಹೊಸ ಆಲೋಚನೆಗಳು ಮತ್ತು ಅಭ್ಯಾಸಗಳ ಹರಿವೂ ಕಡಿಮೆಯಾಯಿತು. ಇತರ ಸರಕಾರಿ ಯೋಜನೆಗಳಂತೆಯೇ ಮೂಲಸೌಕರ್ಯಗಳನ್ನು ಒದಗಿಸುವ ಪ್ರಕ್ರಿಯೆಗಳಿಗೇ ಹೆಚ್ಚಿನ ಆದ್ಯತೆ ದೊರೆಯತೊಡಗಿತು. ಪರಿಣಾಮವಾಗಿ DPEPಯಲ್ಲಿದ್ದ ಚೈತನ್ಯ ಮತ್ತು ಸ್ಪಂದನೆಗಳು SSAಯಲ್ಲಿ ಇಲ್ಲವಾದವು.

ವಾಸ್ತವದಲ್ಲಿ, ಶಿಕ್ಷಕರ ಗುಣಮಟ್ಟವನ್ನು ಕುಂಠಿತಗೊಳಿಸಲು DPEP ಮತ್ತು SSAಗಳೆರಡೂ ಗಮನಾರ್ಹ ಕೊಡುಗೆಯನ್ನಿತ್ತಿವೆ. DPEPಯ ಅನುಷ್ಠಾನದೊಂದಿಗೆ ಆದ ಒಂದು ಬಹು ಮುಖ್ಯ ಬೆಳವಣಿಗೆಯೆಂದರೆ ಬಹಳ ಕಡಿಮೆ ಸಂಬಳವನ್ನು ಪಡೆಯುತ್ತಿದ್ದ 'ಪರ್ಯಾಯ' ಶಿಕ್ಷಕರು ಮತ್ತು ಗುತ್ತಿಗೆ ನೌಕರರನ್ನು ನೇಮಿಸಿಕೊಳ್ಳುವ ಪರಿಪಾಠ ಆರಂಭವಾದದ್ದು. ಏಕೆಂದರೆ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ಅನೇಕ ರಾಜ್ಯಗಳಲ್ಲಿ ಹೆಚ್ಚಿನ ಸಂಖ್ಯೆಯ ಹೆಚ್ಚುವರಿ ಶಿಕ್ಷಕರ ಅಗತ್ಯವಿತ್ತು. ಆದರೆ ಬಹುತೇಕ ರಾಜ್ಯ ಸರ್ಕಾರಗಳ ಆರ್ಥಿಕ ಪರಿಸ್ಥಿತಿ ಉತ್ತಮವಾಗಿರಲಿಲ್ಲ. ಪ್ರಾಥಮಿಕ ಶಿಕ್ಷಣವನ್ನು ಸರ್ವರಿಗೂ ಒದಗಿಸುವ ಒತ್ತಡ ಹೆಚ್ಚಾದಂತೆಲ್ಲ ರಾಜ್ಯಗಳು ಶಿಕ್ಷಕರ ಮೇಲಿನ ಖರ್ಚನ್ನು ಕಡಿತಗೊಳಿಸಲು ಪ್ರಯತ್ನಿಸಿದವು. ಇದರಿಂದ ಇನ್ನೂ ಹೆಚ್ಚಿನ ಶಿಕ್ಷಕರನ್ನು ನೇಮಿಸಿಕೊಳ್ಳಹುದಾಗಿದ್ದು, ಪರ್ಯಾಯ-ಶಿಕ್ಷಕರ ನೇಮಕವನ್ನು ಆರಂಭಿಸಲಾಯಿತು. ಮಧ್ಯಪ್ರದೇಶದಲ್ಲಿ ನಿಯತ (regular) ಶಿಕ್ಷಕರನ್ನು 'ಕೊನೆಯಾಗುತ್ತಿರುವ ಘಟಕ'ದವರು (dying cadre) ಎಂದು ಘೋಷಿಸಲಾಯಿತು ಮತ್ತು ಅವರು ನಿವೃತ್ತಿಗೊಳ್ಳತೊಡಗಿದಂತೆ ಪರ್ಯಾಯ ಶಿಕ್ಷಕರನ್ನು ನೇಮಿಸಿಕೊಳ್ಳಲಾಯಿತು. ಮಧ್ಯಪ್ರದೇಶ ಸರಕಾರದ 'ಶಿಕ್ಷಣ ಭರವಸೆ ಯೋಜನೆ'ಯು ಕಡಿಮೆ ಸಂಬಳದ ಗುತ್ತಿಗೆ ಶಿಕ್ಷಕರ ಸಮುದಾಯದ ಪರಿಕಲ್ಪನೆಯು ಹದಗೆಟ್ಟ ಆರ್ಥಿಕ ಪರಿಸ್ಥಿತಿಯ ನಿಟ್ಟಿನ ಪ್ರತಿಕ್ರಿಯೆ ಮಾತ್ರವಲ್ಲ, ಅದು ಅಪೇಕ್ಷಣೀಯವೂ (ಸ್ವೀಕಾರರ್ಹ) ಹೌದು ಎಂಬಂತೆ ಬಿಂಬಿಸಿ ಪ್ರಚಾರ ಮಾಡಿತು ಮತ್ತು ಈ ನಡೆಯನ್ನು ಮೆಚ್ಚಿಕೊಂಡವರು ಹಲವರಿದ್ದರು. ಪರ್ಯಾಯ (ಗುತ್ತಿಗೆ) ಶಿಕ್ಷಕರನ್ನು ನೇಮಿಸಿಕೊಳ್ಳಲು ಎಲ್ಲಾ ರಾಜ್ಯಗಳೂ ಮಧ್ಯಪ್ರದೇಶದಷ್ಟೇ ಉತ್ಸುಕತೆಯನ್ನು ತೋರಿಸಲಿಲ್ಲ. ಆದರೆ ಹೆಚ್ಚು ಕಡಿಮೆ ಎಲ್ಲಾ ರಾಜ್ಯಗಳೂ ಪರ್ಯಾಯ ಶಿಕ್ಷಕರನ್ನು ನೇಮಿಸಿಕೊಂಡವು.

ಪರ್ಯಾಯ ಶಿಕ್ಷಕರ ನೇಮಕಾತಿಗೆ ಬಹಳ ಜನ ವಿರೋಧ ವ್ಯಕ್ತಪಡಿಸಿದರು. ನಿಯತ ಶಿಕ್ಷಕರು ಖಾಯಂ ಶಿಕ್ಷಕರಾಗಿರುವುದರಿಂದ ಸ್ವಸಂತುಷ್ಟರಾಗಿದ್ದು, ಕೆಲಸಕ್ಕೆ ಸರಿಯಾಗಿ ಹಾಜರಾಗುವುದಿಲ್ಲ, ಅಧ್ಯಾಪನದಲ್ಲಿ ಬದ್ಧತೆಯಿಲ್ಲ. ಹಾಗಾಗಿ ಅವರಿಗೆ ಒಳ್ಳೆಯ ಸಂಬಳ ನೀಡುವುದು ಅಗತ್ಯವಿಲ್ಲ ಎಂದು ಅದರ ಪರವಾಗಿ ಇದ್ದವರು ವಾದ ಮಾಡಿದರು. ಗುತ್ತಿಗೆ ಆಧಾರದ ಮೇಲೆ ಬರುವ ಸಮುದಾಯದ ಶಿಕ್ಷಕರು ಕಡಿಮೆ ಸಂಬಳ ಪಡೆದರೂ ಶಾಲೆಯ ಕೆಲಸಕ್ಕೆ ಬದ್ಧರಾಗಿರುತ್ತಿದ್ದರು. ಶಿಕ್ಷಕರನ್ನು ಹೆಚ್ಚು ವೃತ್ತಿಪರರನ್ನಾಗಿ ತಯಾರು ಮಾಡಬೇಕು ಎಂದು ಪರ್ಯಾಯ ಶಿಕ್ಷಕರ ವಿರುದ್ಧ ಇದ್ದವರು ವಾದ ಮಾಡಿದರು. ಕಡಿಮೆ ಸಂಬಳ ಕೊಟ್ಟು ಕಡಿಮೆ ಅರ್ಹತೆ ಇರುವ ಪರ್ಯಾಯ ಶಿಕ್ಷಕರನ್ನು ನೇಮಿಸಿಕೊಳ್ಳುವುದು ಸರಕಾರಿ ಶಾಲೆಗೆ ಬರುವ ಬಡ ಮಕ್ಕಳಿಗೆ ಅನ್ಯಾಯ ಮಾಡಿದಂತೆ ಆಗುತ್ತದೆ. ಆದರೆ ಈ ವಿಷಯವನ್ನು ವೈಚಾರಿಕ ನೆಲೆಯಲ್ಲಿ ವಸ್ತುನಿಷ್ಠವಾಗಿ ಚರ್ಚಿಸಿದ್ದು ಕಡಿಮೆ. ಉದಾಹರಣೆಗೆ ಚರ್ಚೆಯಲ್ಲಿ ಶಿಕ್ಷಕರ ರಾಜನೀತೀಕರಣ, ನೇಮಕಾತಿಯಲ್ಲಿ ಶಿಫಾರಸ್ಸು ಮತ್ತು ಪ್ರಭಾವದ ಬಳಕೆ, ಒಳ್ಳೆಯ ಕೆಲಸಕ್ಕೆ ಮಾನ್ಯತೆ ಕೊಡದಿರುವುದು ಮುಂತಾದ ಮಹತ್ತ್ವದ ವಿಷಯಗಳು ಮುನ್ನೆಲೆಗೆ ಬರಲಿಲ್ಲ, ಬದಲಿಗೆ ಸಂಬಳ, ಖಾಯಂಗೊಳಿಸುವಿಕೆ ಇವುಗಳನ್ನು ಕುರಿತೇ ಚರ್ಚೆ ನಡೆಯಿತು. ಜೊತೆಗೆ ನೀತಿಗಳನ್ನು ವಿಶ್ಲೇಷಣೆಗಳಿಲ್ಲದೆ, ಚಿಂತನೆ ನಡೆಸದೇ ರಾತ್ರಿ ಬೆಳಗಾಗುವುದರೊಳಗೆ ಬದಲಾಯಿಸಲಾಗುತ್ತಿತ್ತು.

SSA ಆರಂಭಗೊಂಡಾಗ ಅದು ಪರ್ಯಾಯ ಶಿಕ್ಷಕರಿಗೆ ವೇತನವನ್ನು ಕೊಡುವ ಮೂಲಕ ಮೌನವಾಗಿಯೇ ಬೆಂಬಲ ನೀಡಿತು. ಪರ್ಯಾಯ ಶಿಕ್ಷಕರ ನೇಮಕಾತಿಯನ್ನು ಉತ್ತೇಜಿಸಿದ ಆರ್ಥಿಕ ಬಿಕ್ಕಟ್ಟು ಈಗ ಇಲ್ಲದೇ ಇದ್ದರೂ ಆ ಶಿಕ್ಷಕರ ಸಂಖ್ಯೆ ತ್ವರಿತವಾಗಿ ಹೆಚ್ಚುತ್ತ ಹೋಯಿತು. ಕಾಲಕ್ರಮೇಣ ಪರ್ಯಾಯ ಶಿಕ್ಷಕರು ಸಂಘಗಳನ್ನು ರೂಪಿಸಿಕೊಂಡು ಉದ್ಯೋಗ ಭದ್ರತೆ ಮತ್ತು ಉತ್ತಮ ವೇತನಕ್ಕಾಗಿ ಚಳುವಳಿ ನಡೆಸಿದರು. ಅದರ ಪರಿಣಾಮವಾಗಿ ರಾಜ್ಯ ಸರ್ಕಾರಗಳು ಶಿಕ್ಷಕರ ಸಂಬಳವನ್ನು ಏರಿಸಿ, ಪರ್ಯಾಯ ಶಿಕ್ಷಕರ ಕೆಲಸದ ಅವಧಿಯನ್ನು ಇನ್ನಷ್ಟು ಸುರಕ್ಷಿತಗೊಳಿಸುವ ನಿಟ್ಟಿನಲ್ಲಿ ಹಲವು ರಿಯಾಯಿತಿಗಳನ್ನು ನೀಡಿದವು. ಈಗ, ಎರಡೂ ಕ್ಷೇತ್ರಗಳ ಕೆಟ್ಟದ್ದನ್ನು ಅಂಗೀಕರಿಸಿದಂತಾಯಿತು: ಕಡಿಮೆ ಸಂಬಳದ ಗುತ್ತಿಗೆ ನೌಕರಿಗಳ ಜಾಹೀರಾತುಗಳನ್ನು ನೀಡಿದಾಗ, ಕಡಿಮೆ ಸಂಬಳಕ್ಕೆ ಕಡಿಮೆ ಅರ್ಹತೆ ಇದ್ದ ಶಿಕ್ಷಕರನ್ನು ನೇಮಿಸಿಕೊಳ್ಳಲಾಯಿತು, ಸಂಬಳವನ್ನು ಅವರ ಸಾಧನೆಯ ಆಧಾರದ ಮೇಲೆ ಪಾವತಿಸದೆ, ಅವರು ನಡೆಸಿದ ಆಂದೋಲನಗಳ ಯಶಸ್ಸಿನ ಆಧಾರದ ಮೇಲೆ ಹೆಚ್ಚಿಸಬೇಕಾಯಿತು. ಅನೇಕ ಪರ್ಯಾಯ ಶಿಕ್ಷಕರು ಅರೆ-ಖಾಯಂ ಶಿಕ್ಷಕರಾದರು. ಕೆಟ್ಟ ಸಾಧನೆ ತೋರಿದರು ಎಂದು ಶಿಕ್ಷಕರನ್ನು ಕೆಲಸದಿಂದ ತೆಗೆಯುವ ಕಲ್ಪನೆಯೇ ಈಗ ಅರ್ಥಹೀನ ಎನಿಸಿಕೊಂಡಿತು. ಇದರ ಜೊತೆಗೆ ಶಿಕ್ಷಕರನ್ನು ಕುರಿತ ನೀತಿಗಳು ಬದಲಾಗುತ್ತಲೇ ಉಳಿದವು, ಈಗ ಅಸಮಾಧಾನಗೊಂಡ ಮತ್ತು ಆಗಿಂದಾಗ ಪ್ರತಿಭಟಿಸುವ ದೊಡ್ಡ ಸಂಖ್ಯೆಯ ಶಿಕ್ಷಕರೊಂದಿಗೆ ಶಾಲಾ ವ್ಯವಸ್ಥೆಯು ಕಾರ್ಯನಿರ್ವಸುವಂತಾಯಿತು.

ಸಂಸ್ಥೆಗಳು ಮೂಲಭೂತವಾಗಿ ಸುಧಾರಣೆಯಾಗದ ಕಾರಣ, ಇತರ ಕ್ಷೇತ್ರಗಳಲ್ಲೂ ಹಿನ್ನಡೆಗಳು ಕಂಡುಬಂದವು. ಉದಾಹರಣೆಗೆ DPEPಯು ಸಂದರ್ಭಕ್ಕೆ ತಕ್ಕಂತೆ ವಿಕೇಂದ್ರೀಕೃತ ಯೋಜನೆಗೆ ಪ್ರೋತ್ಸಾಹವನ್ನಿತ್ತು, ಪ್ರತೀ ವರ್ಷವೂ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸುವ ಗುರಿಯೊಂದಿಗೆ ಜಿಲ್ಲಾ ಮಟ್ಟದ ಯೋಜನೆಗಳನ್ನು ರೂಪಿಸಲಾಗುತ್ತಿತ್ತು. DPEP ಯೋಜನೆಯ ಮಾರ್ಗದರ್ಶನಗಳು ಕೇವಲ 'ಮಾಡಬೇಕಾದ' ಮತ್ತು 'ಮಾಡಬಾರದ' ವಿಷಯಗಳೊಂದಿಗೆ ಕಡಿಮೆ ಶಬ್ದಗಳಲ್ಲಿ ಚುಟುಕಾಗಿ ಇರುತ್ತಿದ್ದವು. ಏಕೆಂದರೆ ಪ್ರತೀ ಜಿಲ್ಲೆಯೂ ತನ್ನದೇ ಸಮಸ್ಯೆಗಳ ಹಿನ್ನೆಲೆಯಲ್ಲಿ ತನ್ನದೇ ಸ್ವಂತ ಕಾರ್ಯತಂತ್ರಗಳನ್ನು ರೂಪಿಸಿಕೊಳ್ಳಬೇಕೆನ್ನುವುದು ಅದರ ಆಶಯವಾಗಿತ್ತು. ಉದಾಹರಣೆಗೆ ಇನ್ನೂ ಶಾಲೆಗೆ ಸೇರದ ಮಕ್ಕಳನ್ನು ಶಾಲೆಗೆ ದಾಖಲು ಮಾಡಿಕೊಳ್ಳಲು ಸಮುದಾಯಗಳನ್ನು ಸಂಘಟಿಸಿ ಸಂವೇದನಾಶೀಲಗೊಳಿಸುವುದು, ಅಥವಾ ಆ ಮಕ್ಕಳು ಔಪಚಾರಿಕ ಶಾಲೆಗಳನ್ನು ಸೇರಲು ಅನುಕೂಲವಾಗುವಂತೆ 'ಸೇತುವೆ ಕೋರ್ಸ್' (bridge course)' ಅನ್ನು ರೂಪಿಸುವುದು, ಅಥವಾ ಒಂದು ಪರ್ಯಾಯ ಶಿಕ್ಷಣ ಕೇಂದ್ರವನ್ನು ಆರಂಭಿಸುವುದು ಇತ್ಯಾದಿ.

ಕಾರ್ಯತಂತ್ರಗಳಲ್ಲಿ ತಮಗೆ ಯಾವುದು ಸೂಕ್ತವೋ ಅದನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಪ್ರತಿ ಜಿಲ್ಲೆಗೂ ಇತ್ತು. ಇದು, ವಾಡಿಕೆಯ ಸರಕಾರಿ ಯೋಜನೆಗಳಂತೆ ಪೂರ್ವನಿರ್ಧಾರಿತ ಕಾರ್ಯತಂತ್ರಗಳನ್ನು ಹೊಂದಿರಲಿಲ್ಲ. ಉದಾಹರಣೆಗೆ DPEPಯ ಅನುಷ್ಠಾನಕ್ಕೂ ಹಿಂದಿನ ಅನೌಪಚಾರಿಕ ಶಿಕ್ಷಣದ (NFE: Non-formal education)) ಯೋಜನೆಯಲ್ಲಿ ಶಾಲಾ ಶಿಕ್ಷಣದಿಂದ ವಂಚಿತರಾದ ಮಕ್ಕಳನ್ನು ಶಾಲೆಗೆ ಸೇರಿಸಿಕೊಳ್ಳಲು ನಿಗದಿತ ವೆಚ್ಚದಲ್ಲಿ ಅನೌಪಚಾರಿಕ ಶಿಕ್ಷಣ ಕೇಂದ್ರಗಳನ್ನು ತೆರೆಯುವ ಒಂದೇ ಕಾರ್ಯತಂತ್ರವಿತ್ತು. ಆದರೆ ಕೆಲವು ಸಲ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸಲು ಸಮುದಾಯಗಳಲ್ಲಿ ಜಾಗೃತಿ ಉಂಟು ಮಾಡುವುದು, ಅಥವಾ ಹಿರಿಯ ಮಕ್ಕಳು ಶಾಲೆಗೆ ಹಾಜರಾಗಲು ಅನುವಾಗುವಂತೆ ಉಚಿತವಾಗಿ ಮಕ್ಕಳ ಪಾಲನೆಯ ಸೌಕರ್ಯವನ್ನು ಒದಗಿಸುವುದು ಉತ್ತಮ ಕಾರ್ಯತಂತ್ರಗಳೆನಿಸಬಹುದು.

DPEPಯಲ್ಲಿ ಪ್ರತೀ ವರ್ಷ ಜಿಲ್ಲಾವಾರು ಯೋಜನೆಗಳನ್ನು ತಯಾರಿಸುವಾಗ, ಅದರ ಎಲ್ಲಾ ಮಗ್ಗುಲುಗಳನ್ನೂ ಆಳವಾಗಿ ಒಮ್ಮೆ ಚರ್ಚಿಸಲಾಗುತ್ತಿತ್ತು ಮತ್ತು ವಿಶ್ಲೇಷಿಸಲಾಗುತ್ತಿತ್ತು. ಆ ಚರ್ಚೆಗಳಲ್ಲಿ ಮಕ್ಕಳನ್ನು ಶಾಲೆಗೆ ದಾಖಲಿಸಲು ಹಲವು ಹೊಸ ಕಾರ್ಯತಂತ್ರಗಳು ಹೊರಹೊಮ್ಮಿದವು. ಆದರೆ ಆರಂಭದಿಂದಲೂ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿಯೂ ಯೋಜನೆಗಳು ಒಂದೇ ರೀತಿ ಇರಬೇಕೆನ್ನುವ ಕಾರಣಕ್ಕೆ ನಿರ್ಧಾರಗಳನ್ನು ರಾಜ್ಯ ಮಟ್ಟದಲ್ಲಿ ಕೈಗೊಳ್ಳುವ ವಾಡಿಕೆ ಇತ್ತು. ಇದಕ್ಕೆ ಎರಡು ಕಾರಣಗಳಿವೆ. ಮೊದಲನೆಯದಾಗಿ ಜಿಲ್ಲಾ ಮಟ್ಟದಲ್ಲಿ ಸಾಮರ್ಥ್ಯದ ಕೊರತೆಯಿದ್ದು, ಜಿಲ್ಲಾ ಕಛೇರಿಗಳಲ್ಲಿ ಮಾನವ ಸಂಪನ್ಮೂಲವು ಸೀಮಿತವಾಗಿತ್ತು. ಅದರ ಜೊತೆಗೆ ಜಿಲ್ಲಾ ಅಧಿಕಾರಿಗಳಿಗೆ ಯೋಜನೆಗಳನ್ನು ರೂಪಿಸುವ ಅಭ್ಯಾಸವಿರಲಿಲ್ಲ, ಹೀಗಾಗಿ ಅವರು ಅತ್ಯುತ್ತಮ ಯೋಜನೆಗಳನ್ನು ರೂಪಿಸಲಾಗುತ್ತಿರಲಿಲ್ಲ. ಅಂತಹ ಸಂದರ್ಭಗಳಲ್ಲಿ, ರಾಜ್ಯದ ಅಧಿಕಾರಿಗಳು ಪ್ರವೇಶಿಸುತ್ತಿದ್ದರು. ಎರಡನೆಯದಾಗಿ ರಾಜ್ಯದ ಅಧಿಕಾರಿಗಳು ಜಿಲ್ಲಾ ಅಧಿಕಾರಿಗಳಿಗೆ ನಿರ್ದೇಶನ ನೀಡುವುದು ಸರಕಾರಿ ಇಲಾಖೆಗಳಲ್ಲಿ ಸಾಮಾನ್ಯವಾಗಿತ್ತು. ಪರಿಣಾಮವಾಗಿ, ರಾಜ್ಯ ಮತ್ತು ಜಿಲ್ಲೆಯ ಅಧಿಕಾರಿಗಳ ನಡುವೆ ತಮ್ಮ ತಮ್ಮ ಪಾತ್ರಗಳನ್ನು ಕುರಿತು ಸಮಾಧಾನವೇ ಇತ್ತು. ಆದರೆ DPEP ಅಡಿಯಲ್ಲಿ ಯೋಜನೆಗಳು ವಿಕೇಂದ್ರೀಕೃತವಾಗಬೇಕೆಂಬ ಒತ್ತಡವಿತ್ತು, ಹೀಗಾಗಿ ಸ್ವಲ್ಪ ಮಟ್ಟಿಗಾದರೂ ಸಂದರ್ಭಕ್ಕೆ ತಕ್ಕ ಯೋಜನೆಗಳು ಮತ್ತು ಕಾರ್ಯತಂತ್ರಗಳು ರೂಪುಗೊಳ್ಳುತ್ತಿದ್ದವು.

SSAಯಲ್ಲಿ ವಿಕೇಂದ್ರೀಕೃತ ಜಿಲ್ಲಾ ಯೋಜನೆಗಳ ವಿಚಾರವನ್ನು ಉಳಿಸಿಕೊಳ್ಳಲಾಯಿತು, ಅಷ್ಟೇ ಅಲ್ಲ ಗ್ರಾಮ ಮಟ್ಟದ ಯೋಜನೆಗಳನ್ನೂ ಅದು ಉತ್ತೇಜಿಸಿತು. ಆದರೆ ಆಚರಣೆಯಲ್ಲಿ ಮಾತ್ರ ಮೇಲಿನವರ ನಿರ್ದೇಶನವನ್ನೇ ಅವಲಂಬಿಸಲಾಯಿತು. ಮೊದಲಿಗೆ, SSAಯ ಮಾರ್ಗದರ್ಶನಗಳು DPEP ಮಾರ್ಗದರ್ಶನಗಳಿಗಿಂತ ಸಾಕಷ್ಟು ಭಿನ್ನವಾಗಿದ್ದವು. ಮೇಲೆ ಹೇಳಿದಂತೆ DPEPಯಲ್ಲಿ ನಿರ್ದಿಷ್ಟ ಚಟುವಟಿಕೆಗಳನ್ನಾಗಲೀ ಘಟಕಗಳ ನಿಗದಿತ ವೆಚ್ಚವನ್ನಾಗಲೀ ಸೂಚಿಸಿರಲಿಲ್ಲ, ಹಾಗಾಗಿ ಇದು ಪ್ರಮುಖ ಹೊಂದಾಣಿಕೆಗಳಿಗೆ ಅವಕಾಶವಿತ್ತಿತು. ಆದರೆ SSA ಮಾರ್ಗದರ್ಶನಗಳು ಸರ್ಕಾರದ ಎಂದಿನ ಅಭ್ಯಾಸದಂತೆ ಇವೆರಡನ್ನೂ ಒಳಗೊಂಡಿದ್ದವು, ಮತ್ತು ಹಣಕಾಸು ಇಲಾಖೆಯು ಅದನ್ನು ಆಗ್ರಹಿಸಿತ್ತು. SSAಯ ಕಾರ್ಯಶೈಲಿಯು ವಾಡಿಕೆಯ ಸರಕಾರಿ ಯೋಜನೆಗಳಿಗಿಂತ ಹೆಚ್ಚು ಹೊಂದಾಣಿಕೆಯುಳ್ಳದ್ದಾಗಿತ್ತು, ಅಂದರೆ ವಿಸ್ತೃತ ಹರವಿನ ಚಟುವಟಿಕೆಗಳಿಗೆ ಅದು ಅವಕಾಶವಿತ್ತಿತು, ಮತ್ತು ಜಿಲ್ಲೆಗಳಿಗೆ ಈ ಚಟುವಟಿಕೆಗಳಿಂದ ತಮಗೆ ಸೂಕ್ತವಾದದ್ದನ್ನು ಆರಿಸಿಕೊಳ್ಳುವ ಅವಕಾಶವಿತ್ತು. ಆದರೆ ಘಟಕದ ಮತ್ತು ಚಟುವಟಿಕೆಗಳ ಖರ್ಚುವೆಚ್ಚಗಳು ಪೂರ್ವನಿರ್ಧಾರಿತವಾಗಿದ್ದರಿಂದ ಜಿಲ್ಲಾ ಯೋಜನೆಗಳಲ್ಲಿ ಆ ಚಟುವಟಿಕೆಗಳನ್ನೇ ನಕಲು ಮಾಡಲಾಯಿತು ಮತ್ತು ಅಂಕಿಅಂಶಗಳನ್ನು ಒದಗಿಸಲಾಯಿತು. SSAಯ ಮೇಲೆ ನಿಯತ ಸರಕಾರಿ ವ್ಯವಸ್ಥೆಯ ನಿಯಂತ್ರಣ ಹೆಚ್ಚಾಗಿದ್ದರಿಂದ ಮೇಲಿನ ಹಂತದಲ್ಲಿರುವವರು ಹೇಳಿದ್ದನ್ನು ಕೆಳ ಹಂತದವರು ಪಾಲಿಸುವ ವಾಡಿಕೆಯು ಇನ್ನಷ್ಟು ಸಶಕ್ತಗೊಂಡಿತು.

ಅದೇ ರೀತಿ, DPEPಯಲ್ಲಿ ಯತ್ನಿಸಿದ ಗಂಭೀರ ಸ್ವರೂಪದ ಬೋಧನಾಕ್ರಮದ ಸುಧಾರಣೆಗಳೂ ನೆಲಕಚ್ಚಿದವು. ಹಲವು ರಾಜ್ಯಗಳಲ್ಲಿ DPEPಯಲ್ಲಿ, ಚಟುವಟಿಕೆಗಳನ್ನು ಆಧರಿಸಿದ ಪಠ್ಯಪುಸ್ತಕಗಳನ್ನು ರಚಿಸಲಾಯಿತು. ಆದರೆ ಅದು ದುಸ್ಸಾಧ್ಯವಾದ ಕಾರ್ಯವೆನಿಸಿತು. ಅವು ಹೊಸ ಮತ್ತು ಅಪರಿಚಿತ ಕಲಿಕಾ ಕ್ರಮಗಳನ್ನು ಪರಿಚಯಿಸಿದ ನಿಟ್ಟಿನಲ್ಲಿ ತೀವ್ರ ಟೀಕೆಗಳು ಎದುರಾದವು. ಶಿಕ್ಷಕರಿಗೆ ಚಟುವಟಿಕೆಗಳನ್ನು ಆಧರಿಸಿದ ಕಲಿಕೆಗೆ ತರಬೇತಿ ನೀಡುವಾಗ ಹೊಸ ಪರಿಕಲ್ಪನೆಗಳನ್ನು ಅರ್ಥ ಮಾಡಿಕೊಳ್ಳುವುದು ಅವರಿಗೂ ಕಷ್ಟವಾಯಿತು. ಅದಕ್ಕೆ ತಕ್ಕುದಾಗಿ SCERT ಸಿಬ್ಬಂದಿ ಮತ್ತು ಶಿಕ್ಷಣ ಇಲಾಖೆಯ ಸಿಬ್ಬಂದಿಗಳ ಸಾಮರ್ಥ್ಯಗಳನ್ನು ಸಮರ್ಪಕವಾಗಿ ಬೆಳೆಸದೇ ಇದ್ದದ್ದರಿಂದ ಹಲವು ಅಧಿಕಾರಿಗಳು ಮತ್ತು ಶಿಕ್ಷಕ ತರಬೇತಿಯ ಬೋಧಕರು ಈ ಬದಲಾವಣೆಗಳಿಗೆ ವಿರುದ್ಧವಾಗಿದ್ದರು. ಹಲವು ಸಲ ಅದಕ್ಕೆ ಸಂಬಂಧಿಸಿದ ಅಧಿಕಾರಿಗಳು ಅಥವಾ ಸರಕಾರ ಬದಲಾದಂತೆ ಹೊಸ ಪಠ್ಯಪುಸ್ತಕಗಳನ್ನು ಕೈಬಿಡಲಾಗುತ್ತಿತ್ತು. SSAಯಲ್ಲಿ ನಿಯತ ಆಡಳಿತಾಧಿಕಾರಿಗಳು ಮತ್ತು ಶಿಕ್ಷಕ ತರಬೇತಿಯ ಬೋಧಕರನ್ನೇ ಹುದ್ದೆಗಳಿಗೆ ನೇಮಕಮಾಡುತ್ತಿದ್ದ ಕಾರಣ, ಹಾಗೂ ಸರಕಾರೇತರ ಕ್ಷೇತ್ರಗಳ ಪರಿಣತರ ಸಲಹೆಗಳನ್ನು ಪಡೆಯುವುದು ಕಡಿಮೆಯಾದದ್ದರಿಂದ ಶಿಕ್ಷಣ ಮತ್ತು ಬೋಧನಾಕ್ರಮದ ಗುಣಮಟ್ಟದ ಮೇಲೆ ಗಮನ ಕಡಿಮೆಯಾಯಿತು. ಶಿಕ್ಷಕ ತರಬೇತಿ ಯೋಜನೆಗಳನ್ನು ಒಂದು ಕಾಲಕ್ಕೆ ಅತ್ಯಂತ ಕಾಳಜಿ ಮತ್ತು ಬದ್ಧತೆಯಿಂದ ನಡೆಸುತ್ತಿದ್ದರು, ಕ್ರಮೇಣ ಅದು ನಿತ್ಯದ ದಿನಚರಿಯೆಂಬಂತಾಯಿತು ಮತ್ತು ಭ್ರಷ್ಟಾಚಾರಕ್ಕೂ ಮೂಲವಾಯಿತು. ಕೊನೆಯಲ್ಲಿ ಹೊಸ ಶಾಲೆಗಳನ್ನು ಆರಂಭಿಸುವುದು ಮೂಲಸೌಕರ್ಯಗಳನ್ನು ಒದಗಿಸುವುದು, ಹೊಸ ಶಿಕ್ಷಕರನ್ನು ನೇಮಿಸುವುದು, ವಿದ್ಯಾರ್ಥಿಗಳಿಗೆ ಉಚಿತ ಪಠ್ಯಪುಸ್ತಕಗಳನ್ನು ಹಾಗೂ ಸಮವಸ್ತ್ರ ಮುಂತಾದುವನ್ನು ಒದಗಿಸುವುದು ಇವೇ SSAಯ ಮುಖ್ಯ ಕಾಳಜಿಯಾಯಿತು. ಇವೂ ಮುಖ್ಯವಾದವುಗಳೇ, ಆದರೆ ತರಗತಿ ಕೋಣೆಯಲ್ಲಿ ನಡೆಯುವ ಪ್ರಕ್ರಿಯೆಗಳು ಸುಧಾರಿಸಲಿಲ್ಲವಾಗಿ, ಒಂದು ಅತ್ಯುತ್ತಮ ಗುಣಮಟ್ಟದ ಶಾಲಾ ವ್ಯವಸ್ಥೆಯ ಕನಸು ಕೈಗೆಟುಕಲಿಲ್ಲ.

ನನ್ನ ಅಭಿಪ್ರಾಯದಲ್ಲಿ DPEP ಮತ್ತು SSAಯಿಂದ ಆದ ಅತೀ ಮುಖ್ಯವಾದ ಒಂದು ಅನುಭವವೆಂದರೆ ಸರಕಾರವು ಕೆಲಸ ನಿರ್ವಹಿಸುವ ರೀತಿಯನ್ನು ಕುರಿತ ಪಾಠ ಕಲಿತದ್ದು. ಸರಕಾರದಲ್ಲಿ ಮಾನವ ಸಂಪನ್ಮೂಲಗಳಿಗೆ ಸಂಬಂಧಿಸಿದಂತೆ ಮತ್ತು ಕಾರ್ಯಶೈಲಿಯನ್ನು ಕುರಿತಂತೆ ಆಳವಾಗಿ ಬೇರೂರಿರುವ ಸಮಸ್ಯೆಗಳಿವೆ. ಮಾನವ ಸಂಪನ್ಮೂಲದ ಸಂರಚನೆಯೇ ಸಮಸ್ಯಾತ್ಮವಾಗಿದೆ. ಹಲವು ಕ್ಷೇತ್ರಗಳಲ್ಲಿ ಅಗತ್ಯವೆನಿಸಿದ ಪರಿಣತರ ಕೊರತೆಯಿದೆ. ಜೊತೆಗೆ, ಪ್ರಸ್ತುತದಲ್ಲಿನ ಮಾನವ ಸಂಪನ್ಮೂಲಗಳ ನಿರ್ವಹಣೆಯು ಅರ್ಹತೆಯನ್ನು ಆಧರಿಸಿಲ್ಲ. ಒಬ್ಬ ಅಧಿಕಾರಿಯು

ಅರ್ಹತೆಯ ಆಧಾರದ ಮೇಲೆಯೇ ನೇಮಕಗೊಂಡಿದ್ದರೂ ನಂತರ ವೃತ್ತಿಯಲ್ಲಿ ಸ್ಥಳ ನಿಯುಕ್ತಿ ಮತ್ತು ಬಡ್ತಿಗಳಿಗಾಗಿ ಆಕೆ ತನ್ನ ಕೆಲಸವನ್ನು ಸರಿಯಾಗಿ ನಿರ್ವಹಿಸುವುದಕ್ಕಿಂತ ಹೆಚ್ಚಾಗಿ ಸಶಕ್ತ ಗಾಡ್ಫಾದರ್ಗಳನ್ನು ಪೋಷಿಸಿಕೊಳ್ಳುವುದರಲ್ಲಿ ಮಗ್ನಳಾಗಬೇಕಾಗುತ್ತದೆ. ಇದು ಕೆಲಸದೆಡೆಗಿನ ಬದ್ಧತೆಯನ್ನು ಕಡಿಮೆ ಮಾಡುತ್ತದೆ, ಏಕೆಂದರೆ ಅಸ್ತಿತ್ವದಲ್ಲಿರುವ ಉತ್ತೇಜಕದ ಸಂರಚನೆಯು ಒಳ್ಳೆಯ ಕೆಲಸವನ್ನು ಪ್ರೋತ್ಸಾಹಿಸುವುದಿಲ್ಲ. ಶ್ರೇಣೀಕರಣ ಮತ್ತು ಕೇಂದ್ರೀಕರಣವನ್ನು ಆಧರಿಸಿದ ಕೆಲಸದ ಪ್ರಕ್ರಿಯೆಗಳು ಕೆಳಸ್ತರದ ಅಗತ್ಯಗಳಿಗೆ ತಕ್ಕ ಕಾರ್ಯತಂತ್ರಗಳಿಗೆ ತಡೆಯೊಡ್ಡುತ್ತವೆ. ಸರಕಾರದ ಮೇಲಿನ ಸ್ತರದಲ್ಲಿಯೂ ವಿಚಾರವಿಮರ್ಶೆ ಮತ್ತು ಪರ್ಯಾಲೋಚನೆಗಳು ಕೇವಲ ಆಯ್ಕೆಗಳು ಮಾತ್ರ. ಅದರ ಫಲವಾಗಿ ಸರಿಯಾಗಿ ಆಲೋಚನೆ ಮಾಡಿ ರೂಪಿಸದ ಯೋಜನೆಗಳನ್ನು ಮತ್ತು ನೀತಿಗಳನ್ನು ಅದರಲ್ಲೂ ಮುಖ್ಯವಾಗಿ ಅವು ರಾಜಕೀಯವಾಗಿ ಲಾಭಕರ ಎನಿಸಿದಲ್ಲಿ ಪರಿಶೀಲಿಸದೆಯೇ ಮುನ್ನಡೆಸಲಾಗುತ್ತದೆ. ಸೂಕ್ತವಾಗಿ ರೂಪಿಸಿದ ಯೋಜನೆಗಳೂ ಸಹ ತಾಂತ್ರಿಕ ಸಾಮರ್ಥ್ಯವಿರದ ಮತ್ತು ಕಟ್ಟುನಿಟ್ಟಿನ ಶ್ರೇಣೀಕೃತ ವ್ಯವಸ್ಥೆಯನ್ನು ಹೊಂದಿದ ಸಾಂಸ್ಥಿಕ ಸಂರಚನೆಗಳ ಮೂಲಕ ಅನುಷ್ಠಾನಗೊಳ್ಳುವುದರಿಂದ ಅವುಗಳ ಮೇಲೂ ಹೆಚ್ಚಿನ ನಿರೀಕ್ಷೆ ಇಟ್ಟುಕೊಳ್ಳುವುದು ವ್ಯರ್ಥ.

ಈ ಗುಣಲಕ್ಷಣಗಳು ಪ್ರತೀ ಸರಕಾರೀ ಉಪಕ್ರಮವನ್ನು ಪ್ರಭಾವಿಸುತ್ತವೆ. ಎಲ್ಲಾ ಯೋಜನೆಗಳೂ ಪರಿವರ್ತಿತಗೊಂಡು ಈ ಮಾದರಿಯಲ್ಲಿ ರೂಪಣೆಗೊಳ್ಳುತ್ತವೆ. DPEPಯು ಯೋಜನಾ ಸ್ವರೂಪಗಳನ್ನು ಸೃಷ್ಟಿಸಿಕೊಳ್ಳುವ ಮೂಲಕ ಈ ಸಮಸ್ಯೆಗಳನ್ನು ನಿವಾರಿಸಲು ಯತ್ನಿಸಿತು. ಆದರೆ ಅದು ಅಸ್ತಿತ್ವದಲ್ಲಿದ್ದ ಸಾಂಸ್ಥಿಕ ದೋಷಗಳನ್ನು ನಿರ್ವಹಿಸಲು ವಿಫಲವಾಯಿತಲ್ಲದೆ ಬಹುಶಃ ಅವನ್ನು ಮತ್ತಷ್ಟು ವೃದ್ಧಿಸಿ, ಅದರ ಮೇಲೆಯೇ ಅವಲಂಬಿತವಾಯಿತು. DPEPಯ ಒಳ್ಳೆಯ ಪ್ರಯತ್ನಗಳನ್ನು ಕೈಬಿಟ್ಟು SSAಯು ಅವುಗಳನ್ನು ಮುಂದುವರೆಸಿತು.

ಪಾಠವಂತೂ ಸ್ಪಷ್ಟವಾಗಿದೆ. ಇಂದು ಸರಕಾರದ ಹೆಚ್ಚುತ್ತಿರುವ ಆದಾಯವು ಉತ್ತಮ ಗುಣಮಟ್ಟದ ಪ್ರಾಥಮಿಕ ಶಿಕ್ಷಣದ ಸಾಧ್ಯತೆಗಳನ್ನು ತೆರೆದಿದೆ. ಆದರೆ ಸರಕಾರವು ಕೆಲಸ ನಿರ್ವಹಿಸುವ ರೀತಿಯು ಒಂದು ಮುಖ್ಯವಾದ ಅಡ್ಡಿಯಾಗಿದೆ. ಆಳವಾದ ಮತ್ತು ನಿಜವಾದ ಅರ್ಥದ ಸಾಂಸ್ಥಿಕ ಸುಧಾರಣೆಯಾಗದ ಹೊರತು ಉತ್ತಮ ಗುಣಮಟ್ಟದ ಶಾಲಾ ವ್ಯವಸ್ಥೆಯನ್ನು ನಿರ್ಮಿಸುವ ನಿಟ್ಟಿನಲ್ಲಿ ಸಿಗಬಹುದಾದ ಯಶಸ್ಸು ಕನ್ನಡಿಯೊಳಗಿನ ಗಂಟೇ ಸರಿ.

● ಅನುವಾದಕರು: **ಪ್ರಜ್ಞಾ ಎಲ್ ಎಸ್** | ಪರಿಶೀಲಕರು: **ಶೈಲಜಾ ಜಿ ಪಿ**

**ರಶ್ಮಿ** ಅವರು ಭಾರತೀಯ ಆಡಳಿತ ಸೇವೆಯ ಮಾಜಿ ಅಧಿಕಾರಿ. ಅವರು ಭಾರತದ ಪ್ರಾಥಮಿಕ ಶಿಕ್ಷಕ ಹಾಗೂ ಸ್ಥಳೀಯಾಡಳಿತದಲ್ಲಿ ಬಹುಕಾಲ ಸೇವೆ ಸಲ್ಲಿಸಿದ್ದು, ಅನೇಕ ಪುಸ್ತಕಗಳನ್ನು ರಚಿಸಿದ್ದಾರೆ. ಅವರ ಎರಡು ಪುಸ್ತಕಗಳು: 1) ಲೋಕಲ್ ಗೌರ್ನ್‌ಮೆಂಟ್ ಇನ್ ಇಂಡಿಯಾ; ಪಾಲಿಸಿ ಅಂಡ್ ಪ್ರಾಕ್ಟಿಸ್ ಹಾಗೂ 2) ದಿ ಎಲಿಮೆಂಟರಿ ಎಜುಕೇಶನ್ ಸಿಸ್ಟಮ್ ಇನ್ ಇಂಡಿಯ. ಪ್ರಸಕ್ತ ಅವರು ತಳಮಟ್ಟದಲ್ಲಿ ಸರಕಾರದ ಸಂರಚನೆ ಹಾಗೂ ಕಾರ್ಯನಿರ್ವಹಣೆಯ ಕುರಿತು ಸಂಶೋಧನೆ ಹಾಗೂ ಬರವಣಿಗೆ ನಡೆಸುತ್ತಿದ್ದಾರೆ. ಅವರ ಮಿಂಚಂಚೆ: rashmishuklasharma@gmail.com